## ಕರ್ನಾಟಕ ವಿಧಾನ ಪರಿಷತ್ತು

01. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 538

02. ಮಾನ್ಯ ಸದಸ್ಯರ ಹೆಸರು : ಡಾ: ಕೆ. ಗೋವಿಂದ ರಾಜ್ (ವಿಧಾನ ಸಭೆಯಿಂದ ಚುನಾಯಿತರಾದವರು)

03. ಉತ್ತರಿಸುವ ದಿನಾಂಕ : 16/12/2021

04. ಉತ್ತರಿಸುವ ಸಚಿವರು. : ಗೃಹ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಇತ್ತೀಚಿನ ವರ್ಷಗಳಲ್ಲಿ ಕರ್ನಾಟಕದಲ್ಲಿ ಸೈಬರ್ ಕ್ರೈಮ್ ಪ್ರಕರಣಗಳು ಹೆಚ್ಚುತ್ತಿರುವ ಅಂಶವನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಿದೆಯೇ: ಹಾಗಿದ್ದಲ್ಲಿ, ಈ ನಿಟ್ಟಿನಲ್ಲಿ ಕೈಗೊಳ್ಳಲಾಗುತ್ತಿರುವ ಕ್ರಮಗಳೇನು: (ಮಾಹಿತಿ ಒದಗಿಸುವುದು) | ರಾಜ್ಯ ಸರ್ಕಾರವು ಸೈಬರ್ ಕ್ರೈಂ ಪ್ರಕರಣಗಳನ್ನು ಗಂಭೀರವಾಗಿ ಪರಿಗಣಿಸಿದೆ.<br><br>ಸೈಬರ್ ಕ್ರೈಮ್ ಪ್ರಕರಣಗಳು ಹೆಚ್ಚಾಗದಂತೆ ತಡೆಗಟ್ಟಲು ಹಾಗೂ ಸಾರ್ವಜನಿಕರಿಗೆ ಜಾಗೃತಿ ಮೂಡಿಸಲು ಸರ್ಕಾರವು ಕೈಗೊಂಡ ಕ್ರಮದ ವಿವರಗಳನ್ನು **ಅನುಬಂಧದಲ್ಲಿ** ನೀಡಲಾಗಿದೆ. |
| ಆ | ಸೈಬರ್ ಕ್ರೈಮ್ ಪ್ರಕರಣಗಳೆಂದು ಗುರುತಿಸಲ್ಪಡುತ್ತಿರುವ ಪ್ರಕರಣಗಳು ಯಾವುವು: (ವಿವರವಾದ ಪಟ್ಟಿಯನ್ನು ಒದಗಿಸುವುದು) | ಸೈಬರ್ ಕ್ರೈಮ್ ಎಂದು ಗುರುತಿಸಲ್ಪಡುವ ಪ್ರಕರಣಗಳ ವಿವರ ಈ ಕೆಳಕಂಡಂತಿದೆ; (see table below) |
| ಇ | ಆರ್ಥಿಕ ಅಪರಾಧಗಳು ದೇಶದ ಭದ್ರತೆಗೆ ಕಂಟಕಕಾರಿಯಾಗಿ ಪರಿಣಮಿಸುತ್ತಿರುವ ಸೈಬರ್ ಕ್ರೈಮ್ ಪ್ರಕರಣಗಳಿಗೆ ಕಾರಣವಾಗುತ್ತಿರುವ ಅಂಶವನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಿದೆಯೇ; ಹಾಗಿದ್ದಲ್ಲಿ, ಈ ನಿಟ್ಟಿನಲ್ಲಿ ವ್ಯಕ್ತಿ/ಸಂಸ್ಥೆಗಳ ವಿರುದ್ಧ ಕೈಗೊಂಡ ಕ್ರಮಗಳೇನು? (ಸಂಪೂರ್ಣ ಮಾಹಿತಿ ಒದಗಿಸುವುದು) | ಹೌದು.<br>ರಾಜ್ಯದ ನಗರ ಮತ್ತು ಮಹಾನಗರಗಳಲ್ಲಿ ಸೈಬರ್ ಮತ್ತು ಆರ್ಥಿಕ ಅಪರಾಧಗಳಲ್ಲಿ ತೊಡಗಿಸಿಕೊಂಡಿರುವವರ ವಿರುದ್ಧ ಐಪಿಸಿ, ಮತ್ತು ಐಟಿ ಕಾಯ್ದೆ, ಕೆ.ಪಿ.ಐ.ಡಿ ಕಾಯ್ದೆ, ಎಫ್.ಇ ಕಾಯ್ದೆ ಮತ್ತು Buds–2019 ಕಾಯ್ದೆಯ ವಿವಿಧ ಕಲಂಗಳಡಿಯಲ್ಲಿ ಪ್ರಕರಣಗಳನ್ನು ದಾಖಲಿಸಿಕೊಂಡು, ತನಿಖೆಯನ್ನು ನಿಯಮಾನುಸಾರ ಕೈಗೊಂಡು, ಆರೋಪಿತರ ವಿರುದ್ಧ ಘನ ನ್ಯಾಯಾಲಯಗಳಲ್ಲಿ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಲಾಗುತ್ತಿದೆ. |

| SL No | Crimes |
|---|---|
| 1 | Debit/Credit Card Frauds (Fishing) |
| 2 | Job Frauds |
| 3 | Card Skimming |
| 4 | Matrimony Fraud |
| 5 | Business Opportunity Fraud, Data Theft |
| 6 | Other advances fee scams (Gifts, I Phone, OLX, Loan) |
| 7 | Lottery Fraud |
| 8 | SIM Cloning |
| 9 | Social Media Cases |
| 10 | Import & Export Scams (Email Spoofing) |
| 11 | Others (Miscellaneous) |

ಹೆಚ್‌ಡಿ 42 ಪಿಸಿಕ್ಯೂ 2021

(ಆರಗ ಜ್ಞಾನೇಂದ್ರ)
ಗೃಹ ಸಚಿವರು

## ಅನುಬಂಧ

1. ಸೈಬರ್ ಅಪರಾಧಗಳನ್ನು ಕಟ್ಟುನಿಟ್ಟಾಗಿ ನಿಯಂತ್ರಿಸಲು ಹಾಗೂ ತಡೆಗಟ್ಟಲು ರಾಜ್ಯದ ಪ್ರತಿ ಜಿಲ್ಲೆ ಹಾಗೂ ನಗರಗಳಲ್ಲಿ ವಿಶೇಷ ಸೈಬರ್, ನಾರ್ಕೋಟಿಕ್ ಎಕನಾಮಿಕ್ ಪೊಲೀಸ್ ಠಾಣೆಗಳನ್ನು ಸ್ಥಾಪಿಸಲಾಗಿದೆ. ಬೆಂಗಳೂರು ನಗರದ ವಿಭಾಗ ಮಟ್ಟದಲ್ಲಿ 9 ಸೆನ್ ಪೊಲೀಸ್ ಠಾಣೆಗಳು ಸೇರಿದಂತೆ, ರಾಜ್ಯದಲ್ಲಿ ಒಟ್ಟು 46 ಸೆನ್ ಪೊಲೀಸ್ ಠಾಣೆಗಳು ಹಾಗೂ ಸಿಐಡಿ ವಿಭಾಗದಲ್ಲಿ ಸೈಬರ್ ಪೊಲೀಸ್ ಠಾಣೆಯು ಕಾರ್ಯ ನಿರ್ವಹಿಸುತ್ತಿವೆ.

2. ಸೈಬರ್ ಅಪರಾಧ ಪ್ರಕರಣಗಳನ್ನು ತಡೆಗಟ್ಟಲು ಸೆನ್ ಪೊಲೀಸ್ ಠಾಣೆಗಳಿಗೆ ಸೆನ್ ಫಾರೆನ್ಸಿಕ್ ಎಕ್ಯೂಪ್‌ಮೆಂಟ್ ಸಲಕರಣೆಗಳನ್ನು ಒದಗಿಸಲಾಗಿದ್ದು, ಪ್ರಕರಣಗಳು ವರದಿಯಾದ ಕೂಡಲೇ ಸಿಐಆರ್ ಸಾಫ್ಟ್‌ವೇರ್‌ನಲ್ಲಿ ಪ್ರಕರಣಗಳನ್ನು ತ್ವರಿತವಾಗಿ ಇತ್ಯರ್ಥಪಡಿಸಲು ಕ್ರಮಕೈಗೊಳ್ಳಲಾಗಿದೆ.

3. ಸೈಬರ್ ಪೊಲೀಸ್ ಠಾಣೆಯ ಅಧಿಕಾರಿ/ಸಿಬ್ಬಂದಿಗಳಿಗೆ ಸೈಬರ್ ಅಪರಾಧವನ್ನು ತಡೆಗಟ್ಟುವ ಕುರಿತು ವಿಶೇಷ ತರಬೇತಿಯನ್ನು (Advance Technology Training) ನೀಡಲಾಗಿದೆ ಹಾಗೂ ಸಿಐಡಿಯ ನ್ಯಾಸ್‌ಕಾಂ ಲ್ಯಾಬ್‌ನಲ್ಲಿ ಮಿಲಿಟರಿ, ಬ್ಯಾಂಕಿಂಗ್ ಸೆಕ್ಟರ್, ಸರ್ಕಾರಿ ಸಂಸ್ಥೆಗಳು, ಸರ್ಕಾರಿ ಅಭಿಯೋಜಕರಿಗೆ ಹಾಗೂ ಪೊಲೀಸ್ ಇಲಾಖೆಯ ಅಧಿಕಾರಿ/ಸಿಬ್ಬಂದಿಗಳಿಗೆ ಸೈಬರ್ ಅಪರಾಧಗಳನ್ನು ಪತ್ತೆ ಮಾಡುವ ಹಾಗೂ ತಡೆಗಟ್ಟುವ ಬಗ್ಗೆ ತರಬೇತಿ ನೀಡಲಾಗಿದೆ.

4. ಯಾವುದೇ ಕಾರಣಕ್ಕೂ ಓಟಿಪಿ ಸಂದೇಶವನ್ನು / ಕೋಡ್‌ಗಳನ್ನು ಯಾರಿಗೂ ನೀಡಬಾರದೆಂದು / ಬ್ಯಾಂಕಿನ ಕಸ್ಟಮರ್ ಕೇರ್ ನಂಬರ್‌ನ್ನು ಗೂಗಲ್‌ನಲ್ಲಿ ಹುಡುಕಿ ಕರೆ ಮಾಡದಂತೆ ಹಾಗೂ ಅಪರಿಚಿತ ಮೂಲದಿಂದ ಮೊಬೈಲ್‌ಗೆ ಬರುವ ಲಿಂಕ್‌ಗಳನ್ನು ಕ್ಲಿಕ್ ಮಾಡಬಾರದೆಂದು ಸಾಮಾಜಿಕ ಜಾಲತಾಣಗಳಾದ ಫೇಸ್‌ಬುಕ್, ಟ್ವಿಟ್ಟರ್, ಇನ್ಸ್ಟಾಗ್ರಾಂ ಹಾಗೂ ವ್ಯಾಟ್ಸ್‌ಅಪ್‌ಗಳ ಮೂಲಕ ಸೈಬರ್ ಜಾಗೃತಿಯ ಸಂದೇಶಗಳನ್ನು ಹಾಗೂ ಮುದ್ರಣ ಮಾಧ್ಯಮಗಳ ಮುಖಾಂತರ ವರದಿಗಳನ್ನು ಪ್ರಕಟಿಸುವ ಮೂಲಕ ಸಾರ್ವಜನಿಕರಲ್ಲಿ ಜಾಗೃತಿಯನ್ನುಂಟು ಮಾಡಲಾಗುತ್ತಿದೆ.

5. ಬ್ಯಾಂಕ್ ಕಟ್ಟಡದಲ್ಲಿರುವ ಹಾಗೂ ರಕ್ಷಣಾ ಸಿಬ್ಬಂದಿ ಇರುವ ಎಟಿಎಂಗಳನ್ನೇ ಆದಷ್ಟು ಬಳಸುವಂತೆ, ಪಿನ್ ನಂಬರ್ ಟೈಪ್ ಮಾಡುವಾಗ ಯಾರೂ ನೋಡದಂತೆ ಎಚ್ಚರ ವಹಿಸಲು ಸಾರ್ವಜನಿಕರ ಗಮನಕ್ಕೆ ತರಲಾಗುತ್ತಿದೆ.

6. ಆನ್‌ಲೈನ್ ಮೂಲಕ ಉದ್ಯೋಗ ಕೊಡಿಸುವುದಾಗಿ ಹಣ ಕೇಳುವವರ ಮಾಹಿತಿ ಬಗ್ಗೆ, ಉಡುಗೊರೆ ಕಳುಹಿಸುತ್ತಿರುವುದಾಗಿ ನಂಬಿಸುವವರ ವಂಚನಾ ಜಾಲದ ಬಗ್ಗೆ, ಆನ್ ಲೈನ್ ಮೂಲಕ ಮದುವೆಯಾಗುವುದಾಗಿ ನಂಬಿಸುವವರ ಬಗ್ಗೆ ಎಚ್ಚರ ವಹಿಸುವಂತೆ, ಹರ್ಬಲ್ ಉತ್ಪನ್ನಗಳ ವ್ಯವಹಾರದಲ್ಲಿ ಹಣ ಗಳಿಸಬಹುದೆಂದು ಬಣ್ಣಿಸುವವರ ಬಗ್ಗೆ, ಸಾಮಾಜಿಕ ಜಾಲತಾಣದ ಮೂಲಕ ವಸ್ತುಗಳನ್ನು ಖರೀದಿಸುವಾಗ ಎಚ್ಚರ ವಹಿಸುವಂತೆ, ಲಾಟರಿ ಗೆದ್ದಿರುತ್ತೀರಿ ಎಂಬುದಾಗಿ ಬಹುಮಾನ ಸಂದೇಶ/ಕರೆಗಳ ಬಗ್ಗೆ, ಅಪರಿಚಿತರೊಂದಿಗೆ ಆನ್‌ಲೈನ್ ಮೂಲಕ ಗೆಳೆತನ ಬೆಳೆಸಬಾರದಾಗಿ, ಸಿಮ್‌ಕಾರ್ಡ್ ಸ್ಥಗಿತಗೊಂಡಲ್ಲಿ ತಕ್ಷಣ ಬ್ಯಾಂಕಿಗೆ ಕರೆ ಮಾಡಿ ಮಾಹಿತಿ ನೀಡುವುದರ ಕುರಿತು ಮುಂಜಾಗ್ರತಾ ಕ್ರಮಗಳನ್ನು ವಹಿಸುವಂತೆ ಸಾರ್ವಜನಿಕರಲ್ಲಿ ಅರಿವು ಮೂಡಿಸಲಾಗುತ್ತಿದೆ.